

# ಕರ್ನಾಟಕ ವಿಧಾನ ಪರಿಷತ್ತು

| | | | |
|---|---|---|---|
| 1. | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 472 |
| 2. | ಸದಸ್ಯರ ಹೆಸರು | : | ಶ್ರೀ ಕ್ಯಾಪ್ಟನ್ ಗಣೇಶ್ ಕಾರ್ಣಿಕ್ |
| 3. | ಉತ್ತರಿಸಬೇಕಾದ ದಿನಾಂಕ | : | 19.02.2018 |
| 4. | ಉತ್ತರಿಸಬೇಕಾದ ಸಚಿವರು | : | ಮಾನ್ಯ ವೈದ್ಯಕೀಯ ಶಿಕ್ಷಣ ಸಚಿವರು |

| ಕ್ರ.ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| (ಅ) | ರಾಜೀವ್ ಗಾಂಧಿ ಆರೋಗ್ಯ ವಿಧಿ ವಿಜ್ಞಾನ ವಿಶ್ವವಿದ್ಯಾಲಯದ ಉಪ ಕುಲಪತಿಗಳ ಹುದ್ದೆ ಎಷ್ಟು ಸಮಯದಿಂದ ಖಾಲಿ ಉಳಿದಿದೆ; | ರಾಜೀವ್‌ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯದ ಉಪ ಕುಲಪತಿಗಳ ಹುದ್ದೆಯು ದಿ: 14-07-2017 ರಿಂದ ಖಾಲಿ ಉಳಿದಿರುತ್ತದೆ. ಆದರೆ ವಿಶ್ವವಿದ್ಯಾಲಯದ ಆಡಳಿತದ ಹಿತದೃಷ್ಟಿಯಿಂದ ಸದರಿ ದಿನಾಂಕದಿಂದಲೇ ಶ್ರೀ ಎಂ.ಕೆ. ರಮೇಶ್, ಕುಲಸಚಿವರು (ಮೌಲ್ಯಮಾಪನ) ಇವರನ್ನು ವಿಶ್ವವಿದ್ಯಾಲಯದ ಉಪಕುಲಪತಿಗಳ ಹುದ್ದೆಯ ಅಧಿಕ ಪ್ರಭಾರದಲ್ಲಿರಿಸಲಾಗಿದೆ. |
| (ಆ) | ತಾತ್ಕಾಲಿಕ ಉಪ ಕುಲಪತಿಗಳನ್ನು ಬಹಳ ಸಮಯದವರೆಗೆ ಮುಂದುವರೆಸುವುದರಿಂದ ಅವರಿಗೆ ಸಂಪೂರ್ಣ ಅಧಿಕಾರ ಇಲ್ಲದಿರುವುದರಿಂದ ಆಡಳಿತದ ಮೇಲೆ ಪ್ರತಿಕೂಲ ಪರಿಣಾಮವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಇಲ್ಲ. |
| (ಇ) | ಉಪ ಕುಲಪತಿಗಳ ನೇಮಕಕ್ಕೆ ಸರ್ಚ್ ಕಮಿಟಿಯನ್ನು ರಚಿಸಿದ್ದು, ಅದು ತನ್ನ ವರದಿಯನ್ನು ಕೊಟ್ಟು ಹಲವಾರು ತಿಂಗಳು ಕಳೆದಿದ್ದರೂ, ಉಪ ಕುಲಪತಿಗಳ ನೇಮಕಾತಿ ವಿಳಂಬಕ್ಕೆ ಕಾರಣವೇನು; | ರಾಜೀವ್‌ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯದ ಉಪ ಕುಲಪತಿಗಳ ಆಯ್ಕೆಗಾಗಿ ರಾಜ್ಯ ಸರ್ಕಾರವು ದಿನಾಂಕ: 11.07.2017 ರ ಸರ್ಕಾರದ ಆದೇಶದಲ್ಲಿ ಡಾ: ಬಿ.ಜಿ. ಮೂಲಿಮನಿ, ಮಾಜಿ ಉಪಕುಲಪತಿಗಳು, ಬಿ.ಎಲ್.ಡಿ.ಇ ವಿಶ್ವವಿದ್ಯಾಲಯ, ಬಿಜಾಪುರ ಇವರ ಅಧ್ಯಕ್ಷತೆಯಲ್ಲಿ ಶೋಧನಾ ಸಮಿತಿಯನ್ನು ರಚಿಸಿರುತ್ತದೆ. ಶೋಧನಾ ಸಮಿತಿಯು ದಿನಾಂಕ: 07.08.2017 ರಂದು ಸಭೆ ನಡೆಸಿ, ಅಭ್ಯರ್ಥಿಗಳ ಪಟ್ಟಿಯನ್ನು ರಹಸ್ಯ ಲಕೋಟೆಯಲ್ಲಿ ಸರ್ಕಾರಕ್ಕೆ ಸಲ್ಲಿಸಿದ್ದು, ಈ ಬಗ್ಗೆ ಸರ್ಕಾರವು ಪರಿಶೀಲಿಸಿ, ರಾಜೀವ್‌ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯದ ಕುಲಾಧಿಪತಿಗಳಾದ ಮಾನ್ಯ ರಾಜ್ಯಪಾಲರ ಕಛೇರಿಗೆ ಮುಂದಿನ ಕ್ರಮಕ್ಕಾಗಿ ಸಲ್ಲಿಸಲಾಗಿದೆ. |

| | | |
|---|---|---|
| (ಈ) | ಈ ವಿಷಯವನ್ನು ಗಂಭೀರವಾಗಿ ಪರಿಗಣಿಸಿ ಸರ್ಕಾರ ಯಾವ ಕಾಲಮಿತಿಯಲ್ಲಿ ಉಪ ಕುಲಪತಿಗಳ ನೇಮಕಾತಿಯನ್ನು ಪೂರ್ಣಗೊಳಿಸುವುದು? | ವಿಶ್ವವಿದ್ಯಾಲಯದ ಕುಲಾಧಿಪತಿಗಳಾದ ಮಾನ್ಯ ರಾಜ್ಯಪಾಲರ ಅನುಮೋದನೆ ದೊರೆತ ಕೂಡಲೇ ರಾಜೀವ್‌ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯಕ್ಕೆ ಉಪಕುಲಪತಿಗಳನ್ನು ನೇಮಕಾತಿ ಮಾಡಲಾಗುವುದು. |

ಸಂಖ್ಯೆ: ಆಕುಕ 38 ಆರ್‌ಜಿಯು 2018

(ಡಾ: ಶರಣಪ್ರಕಾಶ ಆರ್. ಪಾಟೀಲ)
ವೈದ್ಯಕೀಯ ಶಿಕ್ಷಣ ಸಚಿವರು